ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಪಿ.ಆರ್. ರಮೇಶ್
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 671
ಉತ್ತರಿಸಬೇಕಾದ ದಿನಾಂಕ : 22-02-2022
ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ಸಹಕಾರ ಇಲಾಖೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ಯೋಜನೆಗಳೇನು; (ವಿವರ ನೀಡುವುದು) | ಸಹಕಾರ ಇಲಾಖೆಯಲ್ಲಿ ಪ್ರಸ್ತುತ ಜಾರಿಯಲ್ಲಿರುವ ಯೋಜನೆಗಳು:-<br>**ಸಹಕಾರ ಸಂಘಗಳ ನಿಬಂಧಕರ ಕಛೇರಿ ವ್ಯಾಪ್ತಿಗೆ ಸಂಬಂಧಿಸಿದಂತೆ**<br>1. **ಅಲ್ಪಾವಧಿ ಬೆಳೆ ಸಾಲ ಹಾಗೂ ಹೈನುಗಾರಿಕೆ ಉದ್ದೇಶಕ್ಕಾಗಿ ಕೆ.ಸಿ.ಸಿ.ಸಾಲ:-** ರೂ. 3.00 ಲಕ್ಷಗಳವರೆಗೆ ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಬೆಳೆ ಸಾಲ ಮತ್ತು ಪಶುಸಂಗೋಪನೆ/ಮೀನುಗಾರಿಕೆ ಉದ್ದೇಶಗಳಿಗೆ ದುಡಿಯುವ ಬಂಡವಾಳವಾಗಿ ರೂ.2.00 ಲಕ್ಷಗಳವರೆಗೆ ಶೂನ್ಯ ಬಡ್ಡಿದರದಲ್ಲಿ ಸಾಲ ಸೌಲಭ್ಯ ಒದಗಿಸಲಾಗುತ್ತಿದೆ.<br>2. **ಮಧ್ಯಮಾವಧಿ/ ದೀರ್ಘಾವಧಿ ಕೃಷಿ ಸಾಲ:-** ಕೃಷಿ ಪತ್ತಿನ ಸಹಕಾರ ಸಂಘಗಳ ಅಂದರೆ, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಟಿಬೇಟಿಯನ್ ಸಹಕಾರ ಸಂಸ್ಥೆಗಳು ಲ್ಯಾಂಪ್ಸ್ ಸಹಕಾರ ಸಂಘಗಳು, ಪಿಕಾರ್ಡ್ ಬ್ಯಾಂಕ್‌ಗಳು ಮೂಲಕ ಶೇ. 3 ರ ಬಡ್ಡಿ ದರ ಅನ್ವಯವಾಗುವಂತೆ ಗರಿಷ್ಠ ರೂ.10.00 ಲಕ್ಷಗಳವರೆಗೆ ಸಾಲ ಸೌಲಭ್ಯ ಒದಗಿಸಲಾಗುತ್ತಿದೆ.<br>3. **ಕೃಷಿ ಅಡಮಾನ ಸಾಲಗಳ ಮೇಲಿನ ಬಡ್ಡಿ ಸಹಾಯಧನ:-** ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಪ್ರಾಥಮಿಕ ಕೃಷಿ ಮಾರುಕಟ್ಟೆ ಸಹಕಾರ ಸಂಘಗಳು ರೈತರು ಬೆಳೆದ ಕೃಷಿ ಉತ್ಪನ್ನಗಳನ್ನು ಗೋದಾಮುಗಳಲ್ಲಿ ಶೇಖರಣೆ ಮಾಡಿ ದಾಸ್ತಾನು ಮೌಲ್ಯದ ಗರಿಷ್ಠ ಶೇ.60 ಅಥವಾ ರೂ.2.00 ಲಕ್ಷಗಳವರೆಗೆ ಸಾಲ ವಿತರಿಸುವುದು. ಸಹಕಾರ ಸಂಘಗಳು ಗರಿಷ್ಠ ಶೇ.11 ರ ಬಡ್ಡಿ ದರದಲ್ಲಿ ಬಡ್ಡಿ ಆಕರಣೆ ಮಾಡಿ ಸಾಲವನ್ನು ವಿತರಿಸತಕ್ಕದ್ದು. ಇದಕ್ಕೆ ಸರ್ಕಾರದರಿಂದ ಶೇ.4 ಬಡ್ಡಿ ಸಹಾಯಧನ ನೀಡಲಾಗುವುದು. ರೈತರಿಂದ ಶೇ.7 ಬಡ್ಡಿ ದರ ಪಡೆಯವುದು.<br>4. **ಕೃಷಿ ಉತ್ಪನ್ನಗಳ ಸಂಗ್ರಹಣಾ ಶುಲ್ಕದಲ್ಲಿ ವಿನಾಯಿತಿ:-** ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ತಾಲ್ಲೂಕು ಕೃಷಿ ಮಾರುಕಟ್ಟೆ ಸಹಕಾರ ಸಂಘಗಳು ರೈತರು ಬೆಳೆದ ಕೃಷಿ ಉತ್ಪನ್ನಗಳನ್ನು ಗೋದಾಮುಗಳಲ್ಲಿ ಸಂಗ್ರಹಿಸಿಡಲು ರೈತರು ಪಾವತಿಸುವ ಸಂಗ್ರಹಣಾ ಶುಲ್ಕದಲ್ಲಿ ಶೇ. 25% ರಷ್ಟು ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಶೇ.50% ರಷ್ಟು ಸಹಾಯಧನ ಒದಗಿಸಲಾಗುವುದು. |

5. **ಸ್ವ ಸಹಾಯ ಸಂಘಗಳ ಮೇಲಿನ ಬಡ್ಡಿ ಸಹಾಯಧನ :-** ಡಿಸಿಸಿ ಬ್ಯಾಂಕುಗಳು ತಮ್ಮ ಶಾಖೆಗಳ ಮೂಲಕ ರೂ.5.00 ಲಕ್ಷದವರೆಗಿನ ಸಾಲಗಳನ್ನು ಮಹಿಳಾ ಸ್ವಸಹಾಯ ಗುಂಪುಗಳಿಗೆ ನಿವ್ವಳ ಶೂನ್ಯ ಬಡ್ಡಿದರದಲ್ಲಿ ಮತ್ತು ಪುರುಷ ಸ್ವಸಹಾಯ ಗುಂಪುಗಳಿಗೆ ನಿವ್ವಳ ಶೇ.4 ರ ಬಡ್ಡಿ ದರ ಅನ್ವಯವಾಗುವಂತೆ ಸಾಲ ವಿತರಿಸಲಾಗುತ್ತಿದೆ.

6. **ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಹಿಂದುಳಿದ ವರ್ಗ/ಅಲ್ಪಸಂಖ್ಯಾತರು/ಮಹಿಳೆಯರು/ ಅಲೆಮಾರಿ/ವಿಕಲಚೇತನರನ್ನು ಎಲ್ಲಾ ವಿದಧ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಸಹಾಯಧನ ಮಂಜೂರಾತಿ ಮತ್ತು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವವರರನ್ನು ಸದಸ್ಯರನ್ನಾಗಿ ನೊಂದಾಯಿಸಲು ಸಹಾಯಧನ:-** ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ದವರಿಗೆ ರೂ 1000/- ಹಿಂದುಳಿದ ವರ್ಗ / ಅಲ್ಪಸಂಖ್ಯಾತ ವರ್ಗ/ ಮಹಿಳೆಯರು / ವಿಕಲಚೇತನರು /ಮಹಿಳೆಯರು / ಬಿ.ಪಿ.ಎಲ್.ದಾರರಿಗೆ ರೂ. 500/- ಗಳು ಅಥವಾ ಸಂಘದ ಒಂದು ಷೇರಿನ ಮೌಲ್ಯ  ಪರಿಗಣಿಸಲಾಗುವುದು.

7. **ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆಗೆ ಸಂಬಂಧಿಸಿದಂತೆ ಅನುದಾನ ಮಂಜೂರು ಮಾಡುವ ಯೋಜನೆ:-** ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಗೋದಾಮು, ಮಾರಾಟ ಮಳಿಗೆ ಹಾಗೂ ಸಂಸ್ಕರಣ ಘಟಕಗಳಿಗೆ ಸರ್ಕಾರದಿಂದ ಅನುದಾನ ನೀಡಲಾಗುತ್ತದೆ.

**ಕೃಷಿ ಮಾರಾಟ ಇಲಾಖೆಗೆ ಸಂಬಂಧಿಸಿದಂತೆ**

1. **ಕನಿಷ್ಠ ಬೆಂಬಲ ಬೆಲೆ ಯೋಜನೆ:-**

ರಾಜ್ಯದ ಪ್ರಮುಖ ಮಾರುಕಟ್ಟೆಗಳಲ್ಲಿ ಉತ್ಪನ್ನಗಳ ಧಾರಣೆಯು ಕೇಂದ್ರ ಸರ್ಕಾರವು ಘೋಷಿಸುವ ಬೆಲೆಗಿಂತ ಕಡಿಮೆ ಧಾರಣೆಯಲ್ಲಿ ಮಾರಾಟವಾಗುವ ಸಂದರ್ಭಗಳಲ್ಲಿ ಕೇಂದ್ರ ಸರ್ಕಾರದ ಅನುಮೋದನೆಯೊಂದಿಗೆ ಹಾಗೂ ಕೃಷಿ ಮತ್ತು ತೋಟಗಾರಿಕೆ ಉತ್ಪನ್ನಗಳ ಬೆಲೆ ಸ್ಥಿರೀಕರಣ ಸಚಿವ ಸಂಪುಟ ಉಪಸಮಿತಿಯ ತೀರ್ಮಾನದಂತೆ ಬೆಂಬಲ ಬೆಲೆ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತದೆ. ಈ ಯೋಜನೆಯಡಿ ಅಧಿಸೂಚಿತ ಕೃಷಿ ಉತ್ಪನ್ನಗಳಾದ ಹೆಸರು ಕಾಳು, ತೊಗರಿ, ಕಡಳೆಕಾಳು, ಶೇಂಗಾ, ಸೋಯಾಬಿನ್, ಸೂರ್ಯಕಾಂತಿ, ಉದ್ದಿನ ಕಾಳು ಪ್ರಸಕ್ತ ಸಾಲಿನಲ್ಲಿ ಈ ಯೋಜನೆಯಡಿ 1,39,383 ಕ್ವಿಂಟಾಲ್ ಹೆಸರುಕಾಳು ಉತ್ಪನ್ನವನ್ನು 24,855 ರೈತರಿಂದ ಖರೀದಿಸಲಾಗಿರುತ್ತದೆ ಹಾಗೂ ಇದರ ಜೊತೆಗೆ ಕೇಂದ್ರ ಸರ್ಕಾರವು ಅನುಮೋದಿಸಿರುವಂತೆ ಗರಿಷ್ಠ 2.50 ಲಕ್ಷ ಮೆಟ್ರಿಕ್ ಟನ್ ಎಫ್.ಎ.ಕ್ಯೂ ಗುಣಮಟ್ಟದ ತೊಗರಿಯನ್ನು ಖರೀದಿಸಲಾಗುತ್ತಿದೆ. ಪ್ರತಿ ರೈತರಿಂದ ಗರಿಷ್ಠ 15 ಕ್ವಿಂಟಾಲ್ ಖರೀದಿ ಪ್ರಮಾಣ ಎಂದು ನಿಗಧಿಪಡಿಸಿದ್ದ ಮಿತಿಯನ್ನು ತೆಗೆದು ಹಾಕಲಾಗಿದೆ. ಯಾದಗಿರಿ, ಕಲಬುರಗಿ, ಬೀದರ್, ರಾಯಚೂರು, ಬಳ್ಳಾರಿ, ಬಾಗಲಕೋಟೆ, ಕೊಪ್ಪಳ, ವಿಜಯಪುರ, ಬೆಳಗಾವಿ, ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ತೊಗರಿ

| | | |
|---|---|---|
| | | ಖರೀದಿಸಲು ಕ್ರಮ ವಹಿಸಲಾಗಿರುತ್ತದೆ. ದಿನಾಂಕ:16-2-2022ರ ಅಂತ್ಯಕ್ಕೆ 80,162 ಕ್ವಿಂಟಾಲ್ ತೊಗರಿ ಉತ್ಪನ್ನವನ್ನು 5705 ರೈತರಿಂದ ಖರೀದಿಸಲಾಗಿರುತ್ತದೆ<br><br>ಭತ್ತ, ರಾಗಿ ಹಾಗೂ ಜೋಳ ಉತ್ಪನ್ನಗಳನ್ನೂ ಸಹ ಈ ಯೋಜನೆಯಡಿ ಖರೀದಿಸಲಾಗುತ್ತಿದ್ದು, ಖರೀದಿ ಪ್ರಕ್ರಿಯೆಯನ್ನು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ವತಿಯಿಂದ ಕೈಗೊಳ್ಳಲಾಗಿರುತ್ತದೆ.<br><br>2. **ನಬಾರ್ಡ್ ಯೋಜನೆ (ಆರ್.ಐ.ಡಿ.ಎಫ್/ಡಬ್ಲ್ಯೂ.ಐ.ಎಫ್):**<br>ಈ ಯೋಜನೆಯನ್ನು ಸಚಿವ ಸಂಪುಟದ ಉಪ ಸಮಿತಿ ಸಭೆಯು ಪ್ರತಿ ವರ್ಷ ರಾಜ್ಯ ಸರ್ಕಾರವು ನಬಾರ್ಡ್‌ನಿಂದ ಅಭಿವೃದ್ಧಿ ಕಾಮಗಾರಿಗಳಿಗೆ ತೆಗೆದುಕೊಳ್ಳುವ ಸಾಲದ ಮೊತ್ತವನ್ನು ವಿವಿಧ ಇಲಾಖೆಗಳಿಗೆ ಹಂಚಿಕೆ ಮಾಡುತ್ತಿದ್ದು, ಅದರಂತೆ ಈ ಯೋಜನೆಯಲ್ಲಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. ನಬಾರ್ಡ್ ಸಂಸ್ಥೆಯಿಂದ ಬಿಡುಗಡೆಯಾಗುವ ಮೊತ್ತವು ಸರ್ಕಾರಕ್ಕೆ ಸಾಲವಾಗಿದ್ದು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಶೇಕಡಾ 95ರಷ್ಟು ಅನುದಾನವಾಗಿರುತ್ತದೆ. ಉಳಿದ ಶೇಕಡಾ 5ರಷ್ಟು ಮೊತ್ತವನ್ನು ಮಾರುಕಟ್ಟೆ ಸಮಿತಿಗಳು ತಮ್ಮ ಮಾರುಕಟ್ಟೆ ನಿಧಿಯಿಂದ ಭರಿಸುತ್ತವೆ. 2021-22ನೇ ಸಾಲಿನಲ್ಲಿ ಈ ಯೋಜನೆಯಡಿ ರೂ.112.33 ಕೋಟಿ ಆಯವ್ಯಯ ಅವಕಾಶ ಕಲ್ಪಿಸಲಾಗಿದ್ದು, ಸದರಿ ಅವಕಾಶದಲ್ಲಿ ಇದುವರೆವಿಗೂ ರೂ.84.24 ಕೋಟಿ ಅನುದಾನ ಬಿಡುಗಡೆಯಾಗಿದ್ದು, ಇದರ ಜೊತೆಗೆ ಹೆಚ್ಚುವರಿಯಾಗಿ ರೂ.166.74 ಕೋಟಿ ಅನುದಾನ ಬಿಡುಗಡೆಯಾಗಿರುತ್ತದೆ.<br><br>3. **ವಾರ್ಷಿಕ ಕ್ರಿಯಾ ಯೋಜನೆ:**<br>ಮಾರುಕಟ್ಟೆ ಪ್ರಾಂಗಣಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಮತ್ತು ಹಾಲಿ ಇರುವ ಸೌಲಭ್ಯಗಳನ್ನು ವ್ಯಾಪಾರ ವಹಿವಾಟಿಗೆ ಅನುಗುಣವಾಗಿ ಮೇಲ್ದರ್ಜೆಗೇರಿಸಲು ಸಮಿತಿಗಳ ನಿಧಿಯಿಂದ ಖರ್ಚು ಮಾಡಲಾಗುತ್ತದೆ. ಪ್ರತಿ ವರ್ಷ ಮಾರುಕಟ್ಟೆ ಸಮಿತಿಗಳು ಕೈಗೊಳ್ಳಬೇಕಾದ ಕಾಮಗಾರಿಗಳು ಹಾಗೂ ಲಭ್ಯವಿರುವ ಮಾರುಕಟ್ಟೆ ನಿಧಿ ಮತ್ತು ಅನುದಾನದ ಲಭ್ಯತೆ ಬಗ್ಗೆ ಪರಿಶೀಲಿಸಿಕೊಂಡು ವಾರ್ಷಿಕ ಕ್ರಿಯಾ ಯೋಜನೆ ರೂಪಿಸಿಕೊಂಡು ನಿಯಾಮನುಸಾರ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ.<br><br>4. **ರೈಸ್ ಟೆಕ್ನಾಲಜಿ ಪಾರ್ಕ್-ಕಾರಟಗಿ:-**<br>ಗಂಗಾವತಿ ತಾಲ್ಲೂಕಿನ ಕಾರಟಗಿಯಲ್ಲಿ ರೈಸ್ ಟೆಕ್ನಾಲಜಿ ಪಾರ್ಕ್ ಸ್ಥಾಪಿಸಿ ಭತ್ತ/ಅಕ್ಕಿ ಸ್ವಚ್ಛಗೊಳಿಸಲು, ವರ್ಗೀಕರಿಸಲು, ಸಂಸ್ಕರಿಸಲು, ಪ್ಯಾಕ್ ಮಾಡಲು, ಮಾರಾಟ ಮಾಡಲು, ಬ್ರಾಂಡ್ ಮಾಡಲು, ರಫ್ತು ಮಾಡಲು ಬೇಕಾದಂತಹ ಉನ್ನತ ಮಟ್ಟದ ತಂತ್ರಜ್ಞಾನದ ಸೌಲಭ್ಯಗಳನ್ನು ಕೊಟ್ಟು ಮಾರುಕಟ್ಟೆಯನ್ನು ಅಭಿವೃದ್ಧಿಗೊಳಿಸಲು ಕ್ರಮ ಜರುಗಿಸಲಾಗಿದೆ. ಯೋಜನೆಯ ಅನುಷ್ಠಾನಕ್ಕೆ ಇದುವರೆವಿಗೂ 315 ಎಕರೆ 28 |

ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲಾಗಿದ್ದು, ರೈಸ್ ಟೆಕ್ನಾಲಜಿ ಪಾರ್ಕ್ ಸ್ಥಾಪಿಸುವ ಕುರಿತಂತೆ ಅವಶ್ಯವಿರುವ ಮೂಲಭೂತ ಸೌಲಭ್ಯಗಳನ್ನು ರೂ.120.00 ಕೋಟಿಗಳ ವೆಚ್ಚದಲ್ಲಿ ಕಲ್ಪಿಸಲು Warehouse Infrastructure Fund ಯೋಜನೆಯಡಿ ಮಂಜೂರಾತಿ ದೊರೆತಿದ್ದು, ಅಗತ್ಯ ಮೂಲಭೂತ ಸೌಲಭ್ಯ ಕಲ್ಪಿಸುವ ಕಾಮಗಾರಿ ಪ್ರಗತಿಯಲ್ಲಿವೆ.

5. **ಹಿಂದುಳಿದ ಕೃಷಿ ಉತ್ಪನ್ನ ಮಾರುಕಟ್ಟೆಗಳಿಗೆ ಮೂಲಭೂತ ಸೌಲಭ್ಯ ಸೃಜನೆ ಯೋಜನೆ:**

ಪ್ರತಿ ವರ್ಷ ರಾಜ್ಯ ಸರ್ಕಾರವು ಆಯವ್ಯಯದಲ್ಲಿ ಹಿಂದುಳಿದ ಕೃಷಿ ಉತ್ಪನ್ನ ಮಾರುಕಟ್ಟೆಗಳಿಗೆ ಮೂಲಭೂತ ಸೌಲಭ್ಯ ಸೃಜನೆ ಯೋಜನೆಯಲ್ಲಿ ಆಯವ್ಯಯ ಅವಕಾಶ ಒದಗಿಸುತ್ತಿದ್ದು, ಹಿಂದುಳಿದ ಕೃಷಿ ಉತ್ಪನ್ನ ಮಾರುಕಟ್ಟೆ ಪ್ರಾಂಗಣಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಸರ್ಕಾರವು ನೀಡಿರುವ ಮಾರ್ಗಸೂಚಿ ಮೇರೆಗೆ ಅನುದಾನವನ್ನು ವಿನಿಯೋಗಿಸಲಾಗುತ್ತದೆ. 2021-22ನೇ ಸಾಲಿಗೆ ಈ ಯೋಜನೆಯಡಿ ಆಯವ್ಯಯ ಅವಕಾಶ ಒದಗಿಸಿರುವುದಿಲ್ಲ.

6. **ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (ಆರ್.ಕೆ.ವಿ.ವೈ):**

ಕೇಂದ್ರ ಸರ್ಕಾರವು ಒದಗಿಸುವ ಅನುದಾನದಡಿಯಲ್ಲಿ ರಾಜ್ಯ ಮಟ್ಟದ ಅನುಮೋದನಾ ಸಮಿತಿಯಲ್ಲಿ ಕೃಷಿ ಮಾರಾಟ ಇಲಾಖೆಯು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸುವ ಸಂಬಂಧ ಅನುದಾನವನ್ನು ನಿಗಧಿಪಡಿಸಲಾಗುತ್ತದೆ. 2021-22ನೇ ಸಾಲಿಗೆ ಈ ಯೋಜನೆಯಡಿ ಆಯವ್ಯಯ ಅವಕಾಶ ಒದಗಿಸಿರುವುದಿಲ್ಲ.

7. **ಕಾಯಕ ನಿಧಿ:**

ಕಾಯಕನಿಧಿ ಯೋಜನೆಯಡಿಯಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ನೋಂದಾಯಿಸಲ್ಪಟ್ಟ ಹಮಾಲರಿಗೆ ಅವರ ವೈದ್ಯೋಪಚಾರಕ್ಕಾಗಿ ರಾಜ್ಯ ಸರ್ಕಾರದ ಆರೋಗ್ಯ ಇಲಾಖೆಯಲ್ಲಿ ಆರೋಗ್ಯ ವಿಮಾ ಯೋಜನೆಯಡಿ ಬರದೇ ಇರುವ ಇತರೆ ಕಾಯಿಲೆಗಳಿಗೆ ವೈದ್ಯಕೀಯ ಚಿಕಿತ್ಸೆಗೆ ಸಂಬಂಧಿಸಿದಂತೆ ಗರಿಷ್ಠ ರೂ.1.00 ಲಕ್ಷದವರೆಗೆ ವೈದ್ಯಕೀಯ ವೆಚ್ಚವನ್ನು ಮರುಪಾವತಿಸಲು ಅವಕಾಶ ಕಲ್ಪಿಸಲಾಗಿದೆ. ಇದರ ಜೊತೆಗೆ ನೋಂದಾಯಿಸಲ್ಪಟ್ಟ ಹಮಾಲರು ಮರಣ ಹೊಂದಿದಲ್ಲಿ ಅವರ ಶವಸಂಸ್ಕಾರ ಕಾರ್ಯಕ್ಕಾಗಿ ರೂ.10,000/-ಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿದೆ.

8. **ರೈತ ಸಂಜೀವಿನಿ:**

ಈ ಯೋಜನೆಯಡಿಯಲ್ಲಿ ರೈತರು ಕೃಷಿ ಹಾಗೂ ಕೃಷಿ ಮಾರಾಟ ಚಟುವಟಿಕೆಗಳಲ್ಲಿ ತೊಡಗಿದ್ದಾಗ ಆಕಸ್ಮಿಕವಾಗಿ ಮೃತಪಟ್ಟ ಅಥವಾ ಅಂಗವೈಕಲ್ಯಕ್ಕೆ ಒಳಗಾದ ಸಂದರ್ಭದಲ್ಲಿ ಈ ಯೋಜನೆಯಡಿ ಪರಿಹಾರ

| | | |
|---|---|---|
| | | ನೀಡಲಾಗುತ್ತಿದೆ. ಈ ಯೋಜನೆಯಡಿ ರೈತ ಮೃತಪಟ್ಟಾಗ ರೂ.1.00 ಲಕ್ಷ ಹಾಗೂ ಅಂಗವೈಕಲ್ಯಕ್ಕೊಳಗಾದಾಗ ರೂ.10,000/- ರಿಂದ ರೂ.50,000/-ಗಳ ವರೆಗೆ ಪರಿಹಾರವನ್ನು ವಿತರಿಸಲಾಗುತ್ತಿದೆ.<br><br>**9. ಗ್ರೂಪ್ ಟರ್ಮ್ ವಿಮಾ ಯೋಜನೆ:**<br>ರಾಜ್ಯದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ಲೈಸನ್ಸ್ ಪಡೆದು ಕಾರ್ಯನಿರ್ವಹಿಸುತ್ತಿರುವ ನೋಂದಾಯಿತ ಶ್ರಮಿಕರಿಗೆ 2021-22ನೇ ಸಾಲಿಗೆ ಎಲ್‌ಐಸಿ ಸಹಯೋಗದೊಂದಿಗೆ ಈ ಯೋಜನೆ ಜಾರಿಯಲ್ಲಿರುತ್ತದೆ. ಈ ಯೋಜನೆಯಡಿಯಲ್ಲಿ ಮೃತ ಶ್ರಮಿಕರ ವಾರಸುದಾರರಿಗೆ **ರೂ.1.00 ಲಕ್ಷ ಪರಿಹಾರ ಧನ** ನೀಡಲಾಗುವುದು. |
| ಆ | ಸಹಕಾರ ಇಲಾಖೆಯಿಂದ ಹಲವು ನಕಲಿ ಸೊಸೈಟಿ/ಸಂಘ/ಸಂಸ್ಥೆಗಳಿಗೆ ಅನುದಾನ ನೀಡಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ನಕಲಿ ಸೊಸೈಟಿ/ಸಂಘ/ಸಂಸ್ಥೆಗಳಿಗೆ ಅನುದಾನ ನೀಡಿರುವಂತಹ ಪ್ರಕರಣಗಳು ಕಂಡು ಬಂದಿರುವುದಿಲ್ಲ. |
| ಇ | ಬಂದಿದ್ದಲ್ಲಿ, ಸದರಿ ಸೊಸೈಟಿ/ಸಂಘ/ಸಂಸ್ಥೆಗಳ ವಿರುದ್ಧ ಸರ್ಕಾರದ ಕ್ರಮವೇನು;(ವಿವರ ನೀಡುವುದು) | ಅನ್ವಯಿಸುವುದಿಲ್ಲ. |
| ಈ | ಈ ಅಕ್ರಮಕ್ಕೆ ಸಹಾಯ ಮಾಡಿದ ಇಲಾಖೆ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಂಡ ಕ್ರಮವೇನು?(ಹೆಸರು, ಹುದ್ದೆ ಸಹಿತ ವಿವರ ನೀಡುವುದು) | ಅನ್ವಯಿಸುವುದಿಲ್ಲ. |

**ಸಂಖ್ಯೆ ಸಿಒ 57 ಸಿಎಲ್‌ಎಸ್ 2022**

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು